## ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 377 (336) |
| 2 | ಸದಸ್ಯರ ಹೆಸರು | : | ಶ್ರೀಮತಿ. ಎಸ್. ವೀಣಾ ಅಚ್ಚಯ್ಯ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸುವ ದಿನಾಂಕ | : | 18.02.2022 |
| 4 | ಉತ್ತರಿಸುವ ಸಚಿವರು | : | ಮಾನ್ಯ ಯೋಜನಾ ಸಚಿವರು. |

****

| | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ 2016-17 ರಿಂದ 2021-22 ರವರೆಗೆ ಮಾನ್ಯ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಗೆ ಸಂಬಂಧಿಸಿದಂತೆ, ಪ್ರತಿ ವರ್ಷಕ್ಕೆ ನಿಗದಿಯಾಗಿರುವ ಎರಡು ಕೋಟಿಗಳ ಅನುದಾನದಲ್ಲಿ ಕಡಿತಗೊಳಿಸಲಾಗಿದೆಯೆ; | ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ 2016-17 ರಿಂದ 2021-22 ರವರೆಗೆ ಪ್ರತಿ ಕ್ಷೇತ್ರಕ್ಕೆ ರೂ.2.00 ಕೋಟಿಗಳ ಅನುದಾನವು ನಿಗದಿಯಾಗಿರುತ್ತದೆ. ಆದರೆ, ಆರ್ಥಿಕ ಇಲಾಖೆಯು 2020-21ನೇ ಸಾಲಿನಲ್ಲಿ ಕೋವಿಡ್-19 ರ ಕಾರಣದಿಂದ ಪ್ರತಿ ಕ್ಷೇತ್ರಕ್ಕೆ ರೂ.1.00 ಕೋಟಿಗಳಿಗೆ ಮಿತಿಗೊಳಿಸಲಾಗಿದೆ. |
| (ಆ) | ಕಡಿತಗೊಳಿಸಿದ್ದಲ್ಲಿ, ಯಾವ ವರ್ಷ ಎಷ್ಟು ಅನುದಾನವನ್ನು ಕಡಿತಗೊಳಿಸಲಾಗಿದೆ; ಯಾವ ಕಾರಣಕ್ಕಾಗಿ ಕಡಿತಗೊಳಿಸಲಾಗಿದೆ; | 2020-21ನೇ ಸಾಲಿನಲ್ಲಿ ಮಾತ್ರ ಕೋವಿಡ್-19 ರ ಕಾರಣದಿಂದ ಪ್ರತಿ ಕ್ಷೇತ್ರಕ್ಕೆ ರೂ.1.00 ಕೋಟಿಗಳಿಗೆ ಅನುದಾನವನ್ನು ಮಿತಿಗೊಳಿಸಲಾಗಿರುತ್ತದೆ. |
| (ಇ) | ಕಡಿತಗೊಳಿಸದೆ ಇರುವ ವರ್ಷಗಳಲ್ಲಿ ಎರಡು ಕೋಟಿಗಳ ಅನುದಾನವನ್ನು ಪೂರ್ಣವಾಗಿ ಬಿಡುಗಡೆ ಮಾಡಿ, ಮಾನ್ಯ ಶಾಸಕರು ಸೂಚಿಸುವ ಎರಡು ಕೋಟಿಗಳ ಮೊತ್ತದ ಕಾಮಗಾರಿಗಳಿಗೆ ಪೂರ್ಣ ಹಣ ಒದಗಿಸಲಾಗಿದೆಯೇ? | 2018-19ನೇ ಸಾಲಿನಲ್ಲಿ ಬಂಡವಾಳ ವೆಚ್ಚದಡಿ ರೂ.127.69 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದ್ದು, ಆರ್ಥಿಕ ಇಲಾಖೆಯು ಪೂರಕ ಅಂದಾಜಿನಲ್ಲಿ ಅನುದಾನ ಒದಗಿಸಿದ್ದು, ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯ ಸಹಮತಿ ಕೋರಿದೆ. ಆರ್ಥಿಕ ಇಲಾಖೆಯು ಸಹಮತಿ ನೀಡಿದ ನಂತರ ಬಿಡುಗಡೆಗೊಳಿಸಲಾಗುವುದು.<br><br>2019-20ನೇ ಸಾಲಿನಲ್ಲಿ 17 ಜಿಲ್ಲೆಗಳ ಜಿಲ್ಲಾಧಿಕಾರಿಗಳ ಪಿ.ಡಿ. ಖಾತೆಯಲ್ಲಿ ಲಭ್ಯವಿದ್ದ ಅನುದಾನದಲ್ಲಿ ಶೇ.75 ರಷ್ಟು ವೆಚ್ಚವಾಗದ ಕಾರಣ, ಬಂಡವಾಳ ವೆಚ್ಚದಡಿಯಲ್ಲಿ ಎರಡನೆಯ ಕಂತಿನ ಅನುದಾನ ಬಿಡುಗಡೆಯಾಗ ಬೇಕಾಗಿದ್ದು, ಪ್ರಸಕ್ತ ಲಭ್ಯವಿರುವ ಅನುದಾನದಲ್ಲಿ ಶೇ.75 ರಷ್ಟು ವೆಚ್ಚವಾದ ನಂತರ ಉಳಿಕೆ ಅನುದಾನ ಬಿಡುಗಡೆ ಮಾಡಲು ಕ್ರಮವಹಿಸಲಾಗುವುದು.<br><br>2019-20ನೇ ಸಾಲಿನಲ್ಲಿ ಎರಡು ಕಂತುಗಳು ಬಿಡುಗಡೆಯಾಗಿದ್ದು, ಬಾಕಿ ಇದ್ದ ರೂ.300.00 ಕೋಟಿ ಅನುದಾನವನ್ನು, 2020-21ನೇ ಸಾಲಿನ ಅನುದಾನದಲ್ಲಿ ರೂ.300.00 ಕೋಟಿಗಳನ್ನು 2019-20ನೇ ಸಾಲಿಗೆ ವರ್ಗಾಯಿಸಿಕೊಂಡು ವೆಚ್ಚ ಮಾಡಲು ಆರ್ಥಿಕ ಇಲಾಖೆಯು ಸಹಮತಿ ನೀಡಿದ್ದು, ಈ ಸಂಬಂಧ ದಿನಾಂಕ:13.08.2021 ರಂದು ಸುತ್ತೋಲೆ ಹೊರಡಿಸಿ, ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. |

ಸಂಖ್ಯೆ: ಪಿಡಿಎಸ್ 16 ಕೆಎಲ್‌ಎಸ್ 2022

(ಮುನಿರತ್ನ)
ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖಾ ಸಚಿವರು.

# ಕರ್ನಾಟಕ ಸರ್ಕಾರ

ಸಂಖ್ಯೆ:ಪಿಡಿಎಸ್/82/ ಕೆಎಲ್ಎಸ್/2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:13.08.2021

## ಸುತ್ತೋಲೆ

ದಿನಾಂಕ:03.08.2021ರಂದು ಮಾನ್ಯ ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್- ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ (KLLADS) ಪೂರ್ಣ ಅನುದಾನ ಬಿಡುಗಡೆ ಮಾಡುವುದು ಹಾಗೂ 2021-22ನೇ ಸಾಲಿಗೆ ರೂ.1.00 ಕೋಟಿ ಬದಲು ರೂ.2.00 ಕೋಟಿಗಳ ಅನುದಾನವನ್ನು ಮಂಜೂರು ಮಾಡುವ ಬಗ್ಗೆ ಮತ್ತು ನಿಗದಿತ ಅವಧಿಯಲ್ಲಿ ಕಾಮಗಾರಿಗಳನ್ನೊಳಗೊಂಡ ಕ್ರಿಯಾ ಯೋಜನೆ ರೂಪಿಸಿ, ಅನುಷ್ಠಾನಗೊಳಿಸುವುದು ಹಾಗೂ ಎರಡು ವರ್ಷಕ್ಕಿಂತ ಅವಧಿ ಮೀರಿದ ಕಾಮಗಾರಿಗಳ ಅನುದಾನವನ್ನು ಸರ್ಕಾರಕ್ಕೆ ಎಂಪಿಲ್ಯಾಡ್ಸ್ ಮಾದರಿಯಲ್ಲಿ ಅಧ್ಯರ್ಪಣೆ ಮಾಡುವ ಬಗ್ಗೆ ವಿಸ್ತೃತವಾಗಿ ಚರ್ಚಿಸಲಾಯಿತು ಹಾಗೂ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆದು ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಕ್ತ ನಿರ್ದೇಶನ ನೀಡಲು ನಿರ್ಧರಿಸಲಾಯಿತು ಈ ಕುರಿತು ಆರ್ಥಿಕ ಇಲಾಖೆಯು ದಿನಾಂಕ:09.08.2021ರಂದು ಹಿಂಬರಹ ನೀಡಿದ್ದು, ಸದರಿ ಹಿಂಬರಹದಂತೆ ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳು /ಉಪ ವಿಭಾಗಾಧಿಕಾರಿಗಳು ಸೂಕ್ತ ಕ್ರಮವಹಿಸಲು ತಿಳಿಸಲಾಗಿದೆ.

1. 2021-22ನೇ ಸಾಲಿಗೆ ರೂ.2.00 ಕೋಟಿಗಳಿಗೆ ಕ್ರಿಯಾಯೋಜನೆ ತಯಾರಿಸಲು ಸಹಮತಿ ನೀಡಿದೆ. ಆದ್ದರಿಂದ ಕೂಡಲೇ ಎಲ್ಲಾ ಜಿಲ್ಲಾಧಿಕಾರಿಗಳು ರೂ.2.00ಕೋಟಿಗಳಿಗೆ ಕ್ರಿಯಾಯೋಜನೆ ರೂಪಿಸಿ ಅನುಮೋದನೆ ನೀಡುವುದು.
2. KLLADS ಮಾರ್ಗಸೂಚಿಗಳ ಕಂಡಿಕೆ 3.2 ರ ಅನುಸಾರ ಕ್ರಿಯಾ ಯೋಜನೆಯನ್ನು ಪ್ರತಿ ವರ್ಷ ಜೂನ್ ಅಂತ್ಯದೊಳಗೆ ಅಂತಿಮಗೊಳಿಸತಕ್ಕದ್ದು. ಕಾಮಗಾರಿಗಳ ಪ್ರಗತಿಗೆ ಅನುಗುಣವಾಗಿ ಸರ್ಕಾರದಿಂದ ಜಿಲ್ಲೆಗೆ ಒಟ್ಟಾರೆ ಬಿಡುಗಡೆಯಾಗಿರುವ/ಬಿಡುಗಡೆಯಾಗುವ **(ಶಾಸಕರುವಾರು ಬಿಡುಗಡೆಯಾಗುವುದಿಲ್ಲ)** ಅನುದಾನದಲ್ಲಿ ಭರಿಸತಕ್ಕದ್ದು.
3. ಇನ್ನೂ ಮುಂದೆ ಯೋಜನಾ ಇಲಾಖೆಯು ಅನುದಾನವನ್ನು ಕ್ಷೇತ್ರವಾರು ಬಿಡುಗಡೆ ಮಾಡುವ ಬದಲಾಗಿ ಜಿಲ್ಲಾವಾರು ಬಿಡುಗಡೆ ಮಾಡಲು ಕ್ರಮವಹಿಸುತ್ತದೆ. ಆದ್ದರಿಂದ ಜಿಲ್ಲಾಧಿಕಾರಿಗಳು/ಉಪವಿಭಾಗಾಧಿಕಾರಿ ಲಭ್ಯವಿರುವ ಅನುದಾನವನ್ನು ಪ್ರತಿ ಕ್ಷೇತ್ರಕ್ಕೆ ರೂ.2.00ಕೋಟಿಗಳ ಮಿತಿಯಲ್ಲಿ ಕಾಮಗಾರಿಗಳ ಪ್ರಗತಿ ಆಧರಿಸಿ ಹಣ ಪಾವತಿಸಲು ಸೂಕ್ತ ಕ್ರಮವಹಿಸುವುದು.
4. 2020-21ನೇ ಸಾಲಿನಲ್ಲಿ ಪ್ರತಿ ಕ್ಷೇತ್ರಕ್ಕೆ ರೂ.1.00ಕೋಟಿಗಳಲ್ಲಿ ಕಾಮಗಾರಿಗಳನ್ನು ಕೈಗೊಳ್ಳಲು ಅನುಮೋದನೆ ನೀಡಲಾಗಿತ್ತು. ಹೆಚ್ಚುವರಿಯಾಗಿ ಬಿಡುಗಡೆಯಾಗಿರುವ ಅನುದಾನ ಪ್ರತಿ ಕ್ಷೇತ್ರಕ್ಕೆ ರೂ.1.00ಕೋಟಿಯನ್ನು 2019-20ನೇ ಸಾಲಿಗೆ ವರ್ಗಾಯಿಸಿಕೊಂಡು ಕಾಮಗಾರಿಗಳನ್ನು ಶೀಘ್ರವಾಗಿ ಅನುಷ್ಠಾನಗೊಳಿಸುವುದು.

5. 2018-19ನೇ ಸಾಲಿಗೆ ಸಂಬಂಧಿಸಿದಂತೆ ಪ್ರತಿ ಕ್ಷೇತ್ರಕ್ಕೆ ಬಿಡುಗಡೆಗೆ ಬಾಕಿ ಇರುವ (ರೂ.127.69 ಕೋಟಿಗಳನ್ನು) ನಾಲ್ಕನೇ ಕಂತಿನ ಬಂಡವಾಳ ವೆಚ್ಚದ ಅನುದಾನವನ್ನು ಬಿಡುಗಡೆಗೊಳಿಸಲು ಪ್ರಸ್ತುತ ಜಿಲ್ಲಾಧಿಕಾರಿಗಳ ಪಿಡಿ ಖಾತೆಯಲ್ಲಿ ಲಭ್ಯವಿರುವ ಅನುದಾನವನ್ನು ಪೂರ್ಣವಾಗಿ ವೆಚ್ಚ ಮಾಡಿದ ನಂತರ ಅನುದಾನ ಬಿಡುಗಡೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವುದು.
6. KLLADS ಮಾರ್ಗಸೂಚಿ ಪ್ಯಾರ 4.1 ರಂತೆ ಎರಡು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ಪ್ರಾರಂಭವಾಗದೇ ಉಳಿದಿರುವ ಕಾಮಗಾರಿಯ ಅನುದಾನವನ್ನು ಕೂಡಲೇ ರಾಜ್ಯ ಮಟ್ಟದ ಕೇಂದ್ರೀಕೃತ ಬ್ಯಾಂಕ್ ಖಾತೆಗೆ ಜಮೆಗೊಳಿಸತಕ್ಕದ್ದು.

(ಡಿ.ಚಂದ್ರಶೇಖರಯ್ಯ)
ನಿರ್ದೇಶಕರು,
ಹಾಗೂ ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ,
ಪ್ರದೇಶಾಭಿವೃದ್ಧಿ, ಮಂಡಳಿ ವಿಭಾಗ,
ಯೋಜನೆ ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

**ಇವರಿಗೆ,**

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು-ಮುಂದಿನ ರಾಜ್ಯ ಪತ್ರದಲ್ಲಿ ಪ್ರಕಟಿಸಲು.

**ಪ್ರತಿಯನ್ನು:**

1. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
2. ವಿಧಾನ ಸಭೆ / ವಿಧಾನ ಪರಿಷತ್ತಿನ ಎಲ್ಲಾ ಮಾನ್ಯ ಸದಸ್ಯರುಗಳು.
3. ಸರ್ಕಾರದ ಮುಖ್ಯ ಕಾರ್ಯದರ್ಶಿಯವರು, ವಿಧಾನಸೌಧ.
4. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು, ವಿಧಾನಸೌಧ.
5. ಮಾನ್ಯ ಯೋಜನಾ ಸಚಿವರ ಪ್ರಧಾನ ಕಾರ್ಯದರ್ಶಿಯವರು.
6. ಮಾನ್ಯ ಸಚಿವರುಗಳ ಆಪ್ತ ಕಾರ್ಯದರ್ಶಿಗಳು.
7. ಎಲ್ಲಾ ಜಿಲ್ಲಾಧಿಕಾರಿಗಳು ಮತ್ತು ಸಂಬಂಧಪಟ್ಟ ಉಪವಿಭಾಗಾಧಿಕಾರಿಗಳು.
8. ಎಲ್ಲಾ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು.
9. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಯೋಜನಾ ಇಲಾಖೆ.
10. ಸರ್ಕಾರದ ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಯೋಜನಾ ಇಲಾಖೆ.
11. ಶಾಖಾಧಿಕಾರಿ, ಸ್ಕೀಮರ ಶಾಖೆ, ಯೋಜನಾ ಇಲಾಖೆ (ಕಾಂಪೆಂಡಿಯಮ್‌ಗೋಸ್ಕರ).
12. ಶಾಖಾ ರಕ್ಷಾ ಕಡತ / ಬಿಡಿ ಪ್ರತಿಗಳು. / ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ವೆಬ್‌ಸೈಟ್‌ಗೆ.